ಸ್ವಾಮೀಜಿ—ಹಾಗಾದರೆ ಡೋಣಿಯೊಂದನ್ನು ನೋಡಿರಿ. ಸಂಜೆ ಯಾಯಿತು.

ಡೋಣಿಯು ಬಂದ ಮೇಲೆ ಶಿಷ್ಯ ಹಾಗೂ ನಾಗಮಹಾಶಯರು ಸ್ವಾಮೀಜಿಯವರಿಗೆ ನಮಸ್ಕಾರ ಮಾಡಿ ಡೋಣಿಯಲ್ಲಿ ಕುಳಿತುಕೊಂಡು ಕಲಕತ್ತೆಗೆ ಹೊರಟರು.

## ಪರಿಶಿಷ್ಟ: ೨

ನಾಗಮಹಾಶಯರು ಮರಣ ಹೊಂದಿದ ಮೇಲೆ ಸ್ವಾಮೀ ವಿವೇಕಾನಂದರು ಹಿಂದಕ್ಕೆ ನಾಗಮಹಾಶಯರಿಗೆ ಮಾತು ಕೊಟ್ಟಂತೆ ಒಮ್ಮೆ ದೇವ-ಭೋಗಕ್ಕೆ ಹೋದರು. ( ಸ್ವಾಮಿಜಿಯವರು ಬರುವರೆಂದು ತಿಳಿದು ನಾಗಮಹಾಶಯರು ಹಿಂದೆ ಎಲ್ಲ ಏರ್ಪಾಡನ್ನೂ ಮಾಡಿದ್ದರು. ) ಒಂದು ದಿನ ದೇವಭೋಗದಲ್ಲಿದ್ದು ಡಾಕಾಕ್ಕೆ ಹೊರಟು ಹೋದರು. ಈ ಭಾಗದಲ್ಲಿ ಪ್ರಚಾರ ಕಾರ್ಯ ಮಾಡಲು ಬರುವ ಮೊದಲು ಸ್ವಾಮೀಜಿಯವರು ನಾಗಮಹಾಶಯರ ಭಕ್ತನೊಬ್ಬನಿಗೆ ಹೇಳಿದ್ದರು. " ಆ ಕಡೆಗೆ ಹೋಗಿ ಭಾಷಣ ಮಾಡುವ ಇಚ್ಛೆಯೂ ಇಲ್ಲ. ಪ್ರಯೋಜನೆಯೂ ಇಲ್ಲ. ನಾಗಮಹಾಶಯರ ಪ್ರಭಾವದಿಂದ ತುಂಬಿದ ಆ ಪ್ರಾಂತದಲ್ಲಿ ನಾನು ಹೆಚ್ಚಿಗೆ ಏನು ಹೇಳುವದಿದೆ? " ಅದಕ್ಕೆ ಭಕ್ತನಂದ, " ನಾಗಮಹಾಶರು ಬಹು ಗೌಪ್ಯವಾಗಿದ್ದರು. ಸಾಧಾರಣವಾಗಿ ಅವರು ಎಂದೂ ಏನೂ ನುಡಿದಿಲ್ಲ " ಸ್ವಾಮೀಜಿಯವರೆಂದರು. " ಬಾಯಿಂದ ಏನೂ ನುಡಿದಿಲ್ಲ? ನಾಗಮಹಾಶಯರಂಥ ಮಹಾಪುರುಷರ ವಿಚಾರ ತರಂಗಗಳು (thought) vibrations) ದೇಶದ ವಿಚಾರ ಪ್ರವಾಹವನ್ನೇ ಹೊರಳಿಸುವವು. "

---